ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತನೆಯ ಅಧಿವೇಶನ
ಬುಧವಾರ, ದಿನಾಂಕ : 11 ನೇ ಮಾರ್ಚ್, 2020

ವಿವಿಧ ವಸತಿ ಯೋಜನೆಗಳ ಅಡಿಯಲ್ಲಿ ಮನೆಗಳ ನಿರ್ಮಾಣದ ಬಗ್ಗೆ

ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) :-

651 (842) ಮಾನ್ಯ ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯವನ್ನು ಗುಡಿಸಲು ಮುಕ್ತ ಮಾಡುವ ಸರ್ಕಾರದ "ವಸತಿ ಯೋಜನೆಗಳು" ವಾರ್ಷಿಕ ಗುರಿ ತಲುಪಲು ವಿಳಂಬವಾಗುತ್ತಿರುವುದು ನಿಜವೇ;

(ಆ) ಪ್ರಸಕ್ತ ವರ್ಷದಲ್ಲಿ ಸರ್ಕಾರವು ಜಾರಿಗೊಳಿಸುತ್ತಿರುವ ಯೋಜನೆಗಳಾವುವು; 2017-2018 ಮತ್ತು 2018-2019ರ ಸಾಲಿನಲ್ಲಿ ರಾಜ್ಯ ಸರ್ಕಾರವು ವಿವಿಧ ವಸತಿ ಯೋಜನೆಗಳಡಿಯಲ್ಲಿ ಎಷ್ಟು ಮನೆಗಳನ್ನು ನಿರ್ಮಿಸಲು ಗುರಿ ಹೊಂದಿರುತ್ತದೆ;

(ಇ) ಮೇಲ್ಕಂಡ ವರ್ಷಗಳಲ್ಲಿ ಫಲಾನುಭವಿಗಳು ನಿರ್ಮಿಸಿಕೊಂಡಿರುವ ಮನೆಗಳು ಎಷ್ಟು; ಮತ್ತು ಫಲಾನುಭವಿಗಳು ಪೂರ್ಣಗೊಳಿಸದೆ ಅಪೂರ್ಣಗೊಂಡಿರುವ ಮನೆಗಳಾವುವು; (ವರ್ಷವಾರು ಹಾಗೂ ಯೋಜನಾವಾರು ವಿವರ ನೀಡುವುದು)

(ಈ) ಅಪೂರ್ಣಗೊಂಡಿರುವ ಮನೆಗಳನ್ನು ಪೂರ್ಣಗೊಳಿಸಲು ಕೈಗೊಂಡಿರುವ ಕ್ರಮಗಳೇನು;

(ಉ) ಸದರಿ ಯೋಜನೆಗಳ ಅಡಿಯಲ್ಲಿ ವಸತಿ ಸಮಿತಿಯು ಆಯ್ಕೆ ಮಾಡಿದ ವಿಶೇಷ ವರ್ಗದ ಫಲಾನುಭವಿಗಳು (ಅಂಗವಿಕಲರು ಹಾಗೂ ವಿಧವೆಯರು) ಸೂಕ್ತ ಸಮಯದಲ್ಲಿ ಸಹಾಯ ಧನ ಮತ್ತು ಬ್ಯಾಂಕ್ ಸಾಲ ಲಭ್ಯವಾಗದೇ ಅತಂತ್ರವಾಗಿದ್ದು ಈ ಅತಂತ್ರ ಸ್ಥಿತಿಯಲ್ಲಿದವರಿಗೆ ನ್ಯಾಯ ಒದಗಿಸುವ ಸಲುವಾಗಿ ಸರ್ಕಾರ ಕೈಗೊಂಡ ಕ್ರಮಗಳೇನು ?